



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು - 67

| ಸಂಪುಟ: ೦೭ ಸಂಚಿಕೆ: ೫<br>Vol. 07 Issue 5 | ಮಾರ್ಚ್ ೨೦೨೧<br>March 2021 | ಪುಟಗಳು ೮<br>Pages - 8 | ವಾರ್ಷಿಕ ಚಂದ ರೂ. ೨೦/-<br>A. Sub. - Rs. 20/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್<br>Editor : Sri. B.R. Ravindranath |
|---|---|---|---|---|



**ಬಿ.ಎಂ.ಶ್ರೀ. ಪ್ರತಿಷ್ಠಾನ**
ಸ್ಥಾಪನೆ : ೦೬-೦೫-೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ:೨೬೬೧೫೮೭೭
ಇಮೇಲ್ : bmsritrust@gmail.com
web: www.bmshri.org
ಕಛೇರಿ ಸಮಯ:
ಬೆಳಗ್ಗೆ 10-30ರಿಂದ ಸಂಜೆ 5-00ಗಂಟೆ.
ವಾರದ ರಜೆ: ಭಾನುವಾರ

೧೨-೦೨-೨೦೨೧

# ಎಂ.ಎ. ಜಯಚಂದ್ರ ದತ್ತಿ ಕಾರ್ಯಕ್ರಮ

## ಜಾಲಗೋಷ್ಠಿ

ಉಪನ್ಯಾಸಕರು : ಡಾ. ಪದ್ಮಪ್ರಸಾದ್, ಸಾಹಿತಿಗಳು ಹಾಗೂ ಪ್ರಾಚಾರ್ಯರು

ವಿಷಯ : ಮಿರ್ಜಿ ಅಣ್ಣಾರಾಯರು : ವ್ಯಕ್ತಿ ಮತ್ತು ಸಾಹಿತ್ಯ

ಡಾ. ಜಯಚಂದ್ರ ಅವರು ಪ್ರತಿಷ್ಠಾನದೊಂದಿಗೆ ಸುಮಾರು ೨೫ ವರ್ಷದಿಂದಲೂ ಒಡನಾಟವಿರಿಸಿಕೊಂಡವರು. ಜೈನ ಸಾಹಿತ್ಯ ಪ್ರಚಾರಕ್ಕಾಗಿಯೇ ಪ್ರತಿಷ್ಠಾನದಲ್ಲಿ ದತ್ತಿಯೊಂದನ್ನು ಸ್ಥಾಪಿಸಿದ್ದಾರೆ. ಅನೇಕ ಹೆಸರಾಂತ ವಿದ್ವಾಂಸರು ದತ್ತಿ ನಿಧಿಯಡಿಯಲ್ಲಿ ಉಪನ್ಯಾಸಗಳನ್ನು ನೀಡಿದ್ದಾರೆ ಎಂದು ಡಾ. ಆರ್. ಲಕ್ಷ್ಮೀನಾರಾಯಣ ಅವರು ಪ್ರಾಸ್ತಾವಿಕ ನುಡಿಗಳನ್ನಾಡಿ, ಡಾ. ಪದ್ಮಪ್ರಸಾದ್ ಅವರನ್ನು ಸಭೆಗೆ ಪರಿಚಯಿಸಿ, ಉಪನ್ಯಾಸಕ್ಕೆ ಸ್ವಾಗತಿಸಿದರು.

ಬೆಳಗಾವಿ ಜಿಲ್ಲೆಯ ಶೇಡಬಾಳದಲ್ಲಿ ೧೯೧೮ರಲ್ಲಿ ಜನಿಸಿದ ಮಿರ್ಜಿ ಅವರು ತಮ್ಮ ಸ್ವಂತ ಪರಿಶ್ರಮದಿಂದ ಮೆಟ್ರಿಕ್ ಮತ್ತು ಶಿಕ್ಷಕ ತರಬೇತಿಯನ್ನು ಪಡೆದು, ಮರಾಠಿ, ಹಿಂದಿ, ಇಂಗ್ಲೀಷ್ ಮತ್ತು ಗುಜರಾತಿ ಭಾಷೆಗಳಲ್ಲೂ ವ್ಯವಹಾರ ಮಾಡಲು ಕಲಿತಿದ್ದರು. ಚಿಕ್ಕಂದಿನಲ್ಲೇ ಸಾಹಿತ್ಯಕ್ಕೆ ಆಕರ್ಷಿತರಾದ ಅಣ್ಣಾರಾಯರು ಬರವಣಿಗೆಯನ್ನೂ ಅಭ್ಯಾಸ ಮಾಡಿ ರೂಢಿಸಿಕೊಂಡರು. ಮಿರ್ಜಿಅಣ್ಣಾರಾಯರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ್ದರು. ಸಮಾಜ ಸೇವಕರೆಂದೇ ಕರ್ನಾಟಕದಲ್ಲಿ ಗುರುತಿಸಿಕೊಂಡಿರುವ ಮಿರ್ಜಿ ಅವರು ಪ್ರಸಿದ್ಧ ಸಾಹಿತಿಗಳು. ಆ.ನೇ. ಉಪಾಧ್ಯೆಯವರ ಸಂಪರ್ಕದಲ್ಲಿದ್ದ ಮಿರ್ಜಿಯವರು ಸಂಸ್ಕೃತ ಪ್ರಾಕತದಲ್ಲೂ ಪರಿಶ್ರಮ ಹೊಂದಿದ್ದರು. ಇವರ ಮೇರು ಕೃತಿ "ಜೈನ ಧರ್ಮ" ಈ ಪ್ರಸಿದ್ಧ ಜೈನ ಧರ್ಮಿಯರ ಜೀವನ ಚರಿತ್ರೆಗಳನ್ನು ಇವರು ಬರೆದಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತಿನೊಂದಿಗೆ ನಿಕಟ ಸಂಪರ್ಕವಿರಿಸಿಕೊಂಡಿದ್ದು ೧೯೭೦-೭೪ರವರೆಗೆ ಪರಿಷತ್ತಿನ ಕಾರ್ಯಕಾರಿ ಸಮಿತಿಯ ಸದಸ್ಯರಾಗಿದ್ದರು.

ಸ್ವಾತಂತ್ರ್ಯ ಸಂಗ್ರಾಮವನ್ನು ಕುರಿತ ಇವರ ರಾಷ್ಟ್ರ ಪುರುಷ ಮತ್ತು ರಾಮಣ್ಣ ಮಾಸ್ತರ ಕಾದಂಬರಿಗಳಲ್ಲದೆ ಸಾಮ್ರಾಟ್ ಶ್ರೇಣಿಕ ಮತ್ತು ಚಾವುಂಡರಾಯ ಎಂಬ ಐತಿಹಾಸಿಕ ಕಾದಂಬರಿಗಳನ್ನೂ ರಚಿಸಿದ್ದಾರೆ. "ಋಷಭದೇವ" ಎಂಬುದು ಇದರ ಪೌರಾಣಿಕ ಕಾದಂಬರಿ. ಹಲವು ಜೀವನ ಚರಿತ್ರೆಗಳನ್ನು ಮತ್ತು ಕಥಾಸಂಕಲನಗಳನ್ನೂ ಹೊರತಂದಿದ್ದಾರೆ. ಸಮಾಜ ಸೇವೆ, ಸಾರ್ವಜನಿಕ ಸೇವೆಗೆ ಹೆಸರಾಗಿದ್ದ ಅಣ್ಣಾರಾಯರು ಯುವಬರಹಗಾರರಿಗೆ ಪ್ರೋತ್ಸಾಹ ನೀಡಿ ಅವರ ಪುಸ್ತಕಗಳನ್ನು ಪ್ರಕಟಿಸುತ್ತಿದ್ದರು. ಗ್ರಾಮಸ್ಥರಲ್ಲಿ ಓದುವ ಅಭಿರುಚಿ ಹೆಚ್ಚಿಸಲು, ವಾಚನಾಲಯಗಳನ್ನು, ಗ್ರಂಥಾಲಯಗಳನ್ನು ಸ್ಥಾಪಿಸಲು ನೆರವಾದರು.

ಆದರ್ಶ ಶಿಕ್ಷಕ ಪ್ರಶಸ್ತಿ, ನಿಸರ್ಗ ಕಾದಂಬರಿಗೆ ಕಸಾಪ ಪ್ರಶಸ್ತಿ ಮತ್ತು ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (೧೯೭೦) ಅಲ್ಲದೆ ಹಲವಾರು ಪ್ರಶಸ್ತಿಗಳು ಲಭಿಸಿವೆ. "ಮಿರ್ಜಿಅಣ್ಣಾರಾಯ" ಎಂಬ ಸಂಭಾವನ ಗ್ರಂಥವನ್ನು ಇವರಿಗೆ ಅರ್ಪಿಸಲಾಗಿದೆ. ೧೯೭೫ರಲ್ಲಿ ಅಣ್ಣಾರಾಯರು ನಿಧನರಾದರು ಎಂದು ಪದ್ಮ ಪ್ರಸಾದ್‌ರವರು ತಿಳಿಸಿದರು. ಡಾ. ಬಿ.ಸಿ.ರಾಜಕುಮಾರ್‌ರವರು ಕಾರ್ಯಕ್ರಮದಲ್ಲಿ ಭಾಗವಹಿಸಿದ ಎಲ್ಲರಿಗೂ ವಂದಿಸಿದರು.



## ಸಂಪಾದಕೀಯ

ವರ್ಷದಿಂದ ವರ್ಷಕ್ಕೆ ವರ್ಣರಂಜಿತವಾಗುತ್ತಿರುವಂತೆ ಕಾರ್ಯಕ್ರಮಗಳು ವಿಶಿಷ್ಟತೆಯನ್ನು ಪಡೆಯುತ್ತಿವೆ. ಕಾರ್ಯಕ್ರಮದ ಬಾಹುಳ್ಯ ವಿಸ್ತರಿಸಿದಂತೆ ಹೊಂಗನಸಿಗೆ ಮಾಹಿತಿಯೂ ಹೆಚ್ಚಾಗುತ್ತಿದೆ. ಪುಟಗಳು ದಾಖಲಾಗುತ್ತಿವೆ ಹಾಗೂ ಸ್ಥಳಾವಕಾಶ ಕಡಿಮೆಯಾಗುತ್ತಿದೆ. ಓದುಗರ ವಿಷಯ ಒದಗಿಸುವವರೇ ಈ ಪತ್ರಿಕೆಯ ಜೀವಾಳ. ೪೦ ವರ್ಷಗಳ ಸಾಧನಾ ಪಥವನ್ನು ದಾಖಲಿಸುವ ಸುವರ್ಣಾವಕಾಶ ಶೀಘ್ರ ಬರಲೆಂದು ಆಶಯ.

ಈ ತಿಂಗಳಿನಿಂದ ಬಿಎಂಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳ ಬಗ್ಗೆ **'ಪತ್ರಿಕಾ ನೆನಪು'** ಅಡಿಯಲ್ಲಿ ಪತ್ರಿಕಾ ವರದಿಗಳ ಚಿತ್ರಗಳನ್ನು ಪ್ರಕಟಿಸಿ ದಾಖಲೀಕರಣಕ್ಕೆ ಅನುವು ಮಾಡಿಕೊಡುವ ಪ್ರಯತ್ನ ಮಾಡಿಕೊಡಲಾಗುತ್ತಿದೆ.

– ಬಿ.ಆರ್. ರವೀಂದ್ರನಾಥ

ಕಿರುಪರಿಚಯ

## ಡಾ. ಟಿ.ಎಸ್. ಚನ್ನೇಶ್



ಡಾ. ಟಿ.ಎಸ್. ಚನ್ನೇಶ್ ಅವರು ಕೃಷಿ ವಿಶ್ವವಿದ್ಯಾಲಯ ಬೆಂಗಳೂರಿನಿಂದ ಎಂಎಸ್‌ಸಿ ಮತ್ತು ಪಿ ಹೆಚ್ ಡಿ ಪದವಿಗಳನ್ನು ಪಡೆದಿದ್ದಾರೆ. ರಾಜ್ಯದ ವಿವಿಧ ವೈಜ್ಞಾನಿಕ ಸಂಸ್ಥೆಗಳಲ್ಲಿ ಕೆಲಸ ಮಾಡಿದ ಶ್ರೀಯುತರು ಈಗ ಓರ್ವ ಸ್ವತಂತ್ರ ಸಂಶೋಧಕರಾಗಿ ವಿಜ್ಞಾನ ಮತ್ತು ಸಮಾಜಗಳ ನಡುವಣ ಸಂಬಂಧಗಳ ಕುರಿತಂತೆ ಅಧ್ಯಯನ ಹಾಗೂ ಸಂಶೋಧನೆಯಲ್ಲಿ ತೊಡಗಿಕೊಂಡಿದ್ದಾರೆ.

ಇವರು ಭಾರತದ ಮೊಟ್ಟ ಮೊದಲ ರೈತರೇ ಜಮೀನಿನಲ್ಲೇ ಬಳಸಬಹುದಾದ ಮಣ್ಣು ಪರೀಕ್ಷಾ ಕಿಟ್ ಒಂದನ್ನು ರೂಪಿಸಿಕೊಟ್ಟಿದ್ದಾರೆ. ಅವರು ಸುಮಾರು ೧೫ ಸ್ನಾತಕೋತ್ತರ ಹಾಗೂ ೫ ಪಿ.ಎಚ್.ಡಿ. ವಿದ್ಯಾರ್ಥಿಗಳ ಸಂಶೋಧನೆಗೆ ಮಾರ್ಗದರ್ಶನ ಮಾಡಿದ್ದಾರೆ.

ಕರ್ನಾಟಕ ರಾಜ್ಯದ ಪ್ರಮುಖ ಪತ್ರಿಕೆಗಳಲ್ಲಿ ಇವರ ೮೦೦ಕ್ಕೂ ಹೆಚ್ಚು ಲೇಖನಗಳು ಹಾಗೂ ೧೫ ವಿಜ್ಞಾನ ಪುಸ್ತಕಗಳು ಪ್ರಕಟಗೊಂಡಿವೆ. ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ ಹಾಗೂ ರಾಜ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಅಕಾಡೆಮಿ ಇವರಿಗೆ ಪ್ರಶಸ್ತಿಗಳನ್ನು ನೀಡಿವೆ. ಇವರ ಸುಮಾರು ಹಾಗೂ ೭೫ಕ್ಕೂ ಹೆಚ್ಚು ವಿಜ್ಞಾನ ಭಾಷಣಗಳು ರಾಜ್ಯದ ವಿವಿಧ ಆಕಾಶವಾಣಿ ಕೇಂದ್ರಗಳಿಂದ ಬಿತ್ತರಗೊಂಡಿವೆ. ಇವರ ಅನೇಕ ಸಂಶೋಧನಾ ಬರಹಗಳು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ವೈಜ್ಞಾನಿಕ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇವರು ಅನೇಕ ವಿಜ್ಞಾನ ಕಾರ್ಯಾಗಾರ ಹಾಗೂ ಸೆಮಿನಾರುಗಳನ್ನೂ ಆಯೋಜಿಸಿದ್ದಾರೆ.

### ಮಾರ್ಚ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಮುಳಿಯ ತಿಮ್ಮಪ್ಪಯ್ಯ | ೦೩-೦೩-೧೮೮೮ |
| ಪಿ.ಲಂಕೇಶ | ೦೮-೦೩-೧೯೩೫ |
| ಡಿವಿಜಿ | ೧೭-೦೩-೧೮೭೭ |
| ಪುತಿನ | ೧೭-೦೩-೧೯೦೫ |
| ಸೋಸಲೆ ಅಯ್ಯಾಶಾಸ್ತ್ರಿ | ೨೦-೦೩-೧೮೫೪ |
| ಎಂ.ಗೋವಿಂದಪೈ | ೨೩-೦೩-೧೮೮೩ |

### ಮಾರ್ಚ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಜಿ ಪಿ ರಾಜರತ್ನಂ | ೧೩-೦೩-೧೯೭೯ |
| ಯಶವಂತ ಚಿತ್ತಾಲ | ೨೨-೦೩-೨೦೧೪ |
| ಶಾಂತಿನಾಥ ದೇಸಾಯಿ | ೨೬-೦೩-೧೯೮೮ |

### ಪತ್ರಿಕಾ ಪ್ರಕಟಣೆ

ಬಿ.ಎಂ.ಶ್ರೀ. ಪ್ರತಿಷ್ಠಾನವು ವಾರ್ಷಿಕವಾಗಿ ನೀಡುವ ಸೂ.ವೆಂ. ಆರಗ ವಿಮರ್ಶಾ ಪ್ರಶಸ್ತಿಗಾಗಿ ವಿಮರ್ಶಾ ಕೃತಿಗಳನ್ನು ಆಹ್ವಾನಿಸಿದೆ. ಹತ್ತು ಸಾವಿರ ರೂಪಾಯಿ ನಗದು ಹಾಗೂ ಸ್ಮರಣಿಕೆಗಳನ್ನು ಒಳಗೊಂಡಿರುವ ಈ ಪ್ರಶಸ್ತಿಯನ್ನು ೨೦೨೦ನೆಯ ಸಾಲಿನಲ್ಲಿ (ಜನವರಿ–ಡಿಸೆಂಬರ್ ಅವಧಿ) ಮೊದಲ ಆವೃತ್ತಿಯಾಗಿ ಪ್ರಕಟವಾಗಿರುವ ಕನ್ನಡದ ಶ್ರೇಷ್ಠ ವಿಮರ್ಶಾ ಕೃತಿಯೊಂದಕ್ಕೆ ನೀಡಲಾಗುವುದು. ಆಸಕ್ತರು ೨೦೨೦ರಲ್ಲಿ ಪ್ರಕಟವಾಗಿರುವ ಕನ್ನಡ ವಿಮರ್ಶಾಕೃತಿಯ ಮೂರು ಪ್ರತಿಗಳ ಜೊತೆ ಪ್ರತ್ಯೇಕವಾಗಿ ವಿಳಾಸ ಮತ್ತು ಮೊಬೈಲ್ ನಂ. ನಮೂದಿಸಿ ಸಲ್ಲಿಸಬೇಕು. ಕೃತಿಗಳನ್ನು ಈ ಕೆಳಕಂಡ ವಿಳಾಸಕ್ಕೆ ದಿನಾಂಕ : ೫-೩-೨೦೨೧ ರ ಒಳಗೆ ಕಳುಹಿಸಬೇಕು.

ಕಿರುಪರಿಚಯ

## ಡಾ. ಬಿ. ಎ. ವಿವೇಕ ರೈ

ಕಳೆದ ೫೦ ವರ್ಷಗಳಿಂದ ಅಧ್ಯಯನ, ಅಧ್ಯಾಪನ ಮತ್ತು ಸಂಶೋಧನ ಕ್ಷೇತ್ರಗಳಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡು ಕ್ರಿಯಾಶೀಲರಾಗಿರುವ ಡಾ. ಬಿ. ಎ. ವಿವೇಕ ರೈ ಅವರು ಕನ್ನಡದ ಹಾಗೂ ಕರಾವಳಿಯಲ್ಲಿ ತುಳುವಿನ ಬೆಳವಣಿಗೆಗೆ ವಿಶೇಷವಾಗಿ ದುಡಿಯುತ್ತಿರುವ ಪ್ರಸಿದ್ಧ ವಿದ್ವಾಂಸರು. ಮಂಗಳೂರು ವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕ, ಪ್ರಾಧ್ಯಾಪಕ ಮತ್ತು ವಿಭಾಗದ ಮುಖ್ಯಸ್ಥರಾಗಿ ಮೂರು ದಶಕಗಳಿಗೂ ಮೀರಿದ ದೀರ್ಘಾವಧಿಯಲ್ಲಿ ಎಲ್ಲ ಹಂತಗಳಲ್ಲಿ ಅದನ್ನು ಕಟ್ಟಿ ಬೆಳೆಸಿದವರು. ಅವರ ಕರ್ತೃತ್ವ ಸಾಧನೆಗೆ ತಕ್ಕಂತೆ ಹಂಪಿಯ ಕನ್ನಡ ವಿಶ್ವವಿದ್ಯಾಲಯ ಮತ್ತು ಕರ್ನಾಟಕ ಮುಕ್ತ ವಿಶ್ವವಿದ್ಯಾನಿಲಯದ ಕುಲಪತಿಯ ಪದವಿಗಳು ಅವರಿಗೆ ಒಲಿದು ಬಂದುವು.

ತುಳು ಒಗಟುಗಳು, ತುಳು ಸಂಸ್ಕೃತಿ, ಗಿಳಿಸೂವೆ, ಇರುಳ ಕಣ್ಣು, ಹಿಂದಣ ಹೆಜ್ಜೆ, ರಂಗದೊಳಗಣ ಬಹಿರಂಗ, ಕನ್ನಡ ನುಡಿನಡೆಯ ಬರಹಗಳು, ಕಲಿತದ್ದು ಕಲಿಸಿದ್ದು, ಇವು ಅವರ ಕೆಲವು ಕೃತಿಗಳು. ಇಂಗ್ಲಿಷಿನಲ್ಲೂ ಅವರು ಕೃತಿರಚನೆ ಮಾಡಿದ್ದಾರೆ. ಶ್ರೀ ಸಿ. ಎನ್. ರಾಮಚಂದ್ರನ್ ಅವರ ಜೊತೆ–ಗೂಡಿ ಕನ್ನಡದ ಅಭಿಜಾತ ಕೃತಿಗಳ ಪ್ರಮುಖ ಭಾಗಗಳನ್ನು ಇಂಗ್ಲಿಷಿಗೆ ಅನುವಾದಿಸಿದ್ದಾರೆ. ಜರ್ಮನಿಯ ವುಲ್ಬಬರ್ಗ್ ವಿಶ್ವವಿದ್ಯಾಲಯದ ಅತಿಥಿ ಪ್ರಾಧ್ಯಾಪಕರೂ ಆಗಿದ್ದರು.

ಮಂಗಳೂರು ವಿ. ವಿಯು ಅವರಿಗೆ ಗೌರವ ಡಾಕ್ಟೊರೇಟ್ ನೀಡಿ ಗೌರವಿಸಿದೆ. ಜರ್ಮನಿ, ಜಪಾನ್, ಅಮೆರಿಕಾ ಇಂಗ್ಲೆಂಡ್, ಫಿನ್ಲೆಂಡ್, ದೇಶಗಳಲ್ಲಿ ಸಂಶೋಧನೆ ನಡೆಸಿದ್ದಾರೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಮುಳಿಯ ತಿಮ್ಮಪ್ಪಯ್ಯ ಪ್ರಶಸ್ತಿ, ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಅಧ್ಯಕ್ಷ ಪದವಿ, ಸಂಸ್ಕೃತಿ ಸಮ್ಮೇಳನಗಳ ಅಧ್ಯಕ್ಷ ಪದವಿಯ ಗೌರವಗಳು ಅವರಿಗೆ ಬಂದಿರುವ ಕೆಲವು ಮನ್ನಣೆಗಳು.

ಕೇಂದ್ರಸಾಹಿತ್ಯ ಅಕಾಡೆಮಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಸಾಹಿತ್ಯ ಪರಿಷತ್ತಿನ ಆಡಳಿತ ಮಂಡಳಿ, ಉಡುಪಿಯ ಜಾನಪದ ಕಲೆಗಳ ಸಂಶೋಧನ ಕೇಂದ್ರಗಳ ಗೌರವ ಸದಸ್ಯರೂ ಹೌದು. ಪಿಳಿಕುಳ ಸಂಸ್ಕೃತಿ ಗ್ರಾಮನಿರ್ಮಾಣದಲ್ಲಿ ತೊಡಗಿಸಿಕೊಂಡಿದ್ದಾರೆ.

# ಮಾರ್ಚ್ ೨೦೨೧ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು




ಜಾಲಗೋಷ್ಠಿ- ಕಾರ್ಯಕ್ರಮ

**ದಿನಾಂಕ : ೦೩ -೦೩-೨೦೨೧ ಬುಧವಾರ ಸಂಜೆ ೪-೩೦ಗಂಟೆಗೆ**

**ಸರ್.ಸಿ.ವಿ.ರಾಮನ್ ಸ್ಮಾರಕ ವಿಜ್ಞಾನ ಉಪನ್ಯಾಸ**

ಸ್ಥಾಪಕರು : ಶ್ರೀಮತಿ ಬಿ.ಜಿ. ಕುಸುಮಾ ಸಾಮಾಜಿಕ ಸೇವಾ ಟ್ರಸ್ಟ್(ರಿ)

ಉಪನ್ಯಾಸಕರು : ಡಾ. ಟಿ.ಎಸ್. ಚನ್ನೇಶ್

ವಿಷಯ: ವಿಜ್ಞಾನದ ಅನುಸಂಧಾನದಲ್ಲಿ ಆನಂದ ಮತ್ತು ಬೆರಗು

**ದಿನಾಂಕ : ೧೩-೦೩-೨೦೨೧ ಶನಿವಾರ ಸಂಜೆ ೪-೩೦ಗಂಟೆಗೆ**

**ಶ್ರೀಮತಿ ರಂಗನಾಯಕಮ್ಮ -ಶ್ರೀ ಜಿ. ಸುಬ್ಬರಾವ್ ದತ್ತಿ ಕಾರ್ಯಕ್ರಮ**

**ಸ್ಥಾಪಕರು : ಶ್ರೀಮತಿ ಸುನಂದಾ ಶಿವಶಂಕರ್**

**ಸಂಗೀತ ಕಾರ್ಯಕ್ರಮ**

ಹಾಡುವವರು : ಶ್ರೀಮತಿ ಯೋಗ ಕೀರ್ತನಾ

**ದಿನಾಂಕ : ೧೪-೦೩-೨೦೨೧ ಭಾನುವಾರ ಬೆಳಗ್ಗೆ ೧೦-೩೦ಗಂಟೆಗೆ**

**ದಿ. ಬಿ.ಎಸ್. ಗೋಪಾಲರಾವ್ ಮತ್ತು ಶ್ರೀಮತಿ ವೇದವತಿಬಾಯಿ ದತ್ತಿ ಕಾರ್ಯಕ್ರಮ**

ಸ್ಥಾಪಕರು : ಶ್ರೀಮತಿ ಬಿ.ಜಿ. ಕುಸುಮಾ ಮತ್ತು ಕುಟುಂಬದವರು

**ಗಮಕ ಕಾರ್ಯಕ್ರಮ**

ವಿಷಯ : ಕುಮಾರವ್ಯಾಸ ಭಾರತದ ಒಂದು ಭಾಗ

ಗಮಕ : ಶ್ರೀಮತಿ ಶೋಭಾ ಶಶಿಧರ್

ವಾಚನ : ಶ್ರೀಮತಿ ಐ.ವಿ. ಗಾಯತ್ರಿ

**ದಿನಾಂಕ : ೧೬-೦೩-೨೦೨೧ ಮಂಗಳವಾರ ಸಂಜೆ ೪-೩೦ಗಂಟೆಗೆ**

ಜಾಲಗೋಷ್ಠಿ- ಕಾರ್ಯಕ್ರಮ

**ಪಂಡಿತ್ ಓ.ಆರ್. ರಾಮಣ್ಣ-ಶ್ರೀಮತಿ ಪುಟ್ಟಮ್ಮ ದತ್ತಿ ಉಪನ್ಯಾಸ**

ಸ್ಥಾಪಕರು : ಡಾ. ಆರ್. ಲಕ್ಷ್ಮೀನಾರಾಯಣ

ವಿಷಯ : ಜೈಮಿನಿ ಭಾರತ – ಸುಧನ್ವನ ಭಕ್ತಿ ಪ್ರಸಂಗ

ಉಪನ್ಯಾಸ : ಡಾ. ಎನ್. ಆರ್. ಲಲಿತಾಂಬ

**ದಿನಾಂಕ : ೧೮-೦೩-೨೦೨೧ ಗುರುವಾರ ಸಂಜೆ ೪-೩೦ಗಂಟೆಗೆ**

ಜಾಲಗೋಷ್ಠಿ- ಕಾರ್ಯಕ್ರಮ

**ಜಯಲಕ್ಷಮ್ಮ ಬಾಪುರಾಮಣ್ಣ ದತ್ತಿ ಕಾರ್ಯಕ್ರಮ**

ಸ್ಥಾಪಕರು: ಶ್ರೀ ಎಚ್.ಆರ್. ಬಾಪು ಸತ್ಯನಾರಾಯಣ, ಶ್ರೀಮತಿ ಎಚ್.ಲೀಲಾವತಿ, ಶ್ರೀ ಎಚ್. ಆರ್. ಸೋಮಶೇಖರ್

ವಿಷಯ : ಶಾಲೆಟ್ ಬ್ರಾಂಟಿಯ 'ಜೇನ್ ಏರ್' ಕಾದಂಬರಿಯ ಕನ್ನಡ ರೂಪಾಂತರಗಳು : ನೀಳಾದೇವಿಯವರ 'ಬೇಡಿ ಬಂದವಳು 'ಕಾದಂಬರಿ ಮತ್ತು ಆ ಕಾದಂಬರಿ ಆಧಾರಿತ ಸಿನಿಮಾ 'ಬೇಡಿ ಬಂದವಳು' ಶ್ಯಾಮಲಾ ಮಾಧವ ಅವರ ಕನ್ನಡ ಅನುವಾದ' ಜೇನ್ ಏರ್'.

ಉಪನ್ಯಾಸ : ಡಾ. ಬಿ.ಎ.ವಿವೇಕ ರೈ

ನಿವೃತ್ತ ಉಪಕುಲಪತಿಗಳು, ಹಂಪಿ ಕನ್ನಡ ವಿಶ್ವವಿದ್ಯಾಲಯ ಮತ್ತು ಕರ್ನಾಟಕ ಮುಕ್ತ ವಿಶ್ವವಿದ್ಯಾಲಯ

**ದಿನಾಂಕ : ೨೭-೦೩-೨೦೨೧ ಶನಿವಾರ ಸಂಜೆ ೪-೩೦ಗಂಟೆಗೆ**

**ಕಣಕಟ್ಟೆ ಕೃಷ್ಣಮೂರ್ತಿರಾವ್ ದತ್ತಿ ಕಾರ್ಯಕ್ರಮ**

ಸ್ಥಾಪಕರು : ಶ್ರೀ ಕೆ. ಶ್ರೀಕಂಠಯ್ಯ , ಶ್ರೀ ಕೆ.ಎಸ್. ಚಂದ್ರಶೇಖರ್

**ಕರ್ನಾಟಕ ಶಾಸ್ತ್ರೀಯ ಸಂಗೀತ ಕಾರ್ಯಕ್ರಮ**

ವಿದುಷಿ ಶ್ರೀಮತಿ ನವ್ಯ ನಾಗರಾಜ್

**ದಿ. ಪಂಡಿತ್ ಓ. ಆರ್. ರಾಮಣ್ಣ- ಮತ್ತು ಶ್ರೀಮತಿ ಪುಟ್ಟಮ್ಮ ದತ್ತಿ**

ದಿ. ಪಂಡಿತ್ ಓ. ಆರ್. ರಾಮಣ್ಣನವರು ಮತ್ತು ಶ್ರೀಮತಿ ಪುಟ್ಟಮ್ಮನವರ ನೆನಪಿನಲ್ಲಿ ಪ್ರತಿ ವರ್ಷ ಫೆಬ್ರುವರಿ ತಿಂಗಳಿನಲ್ಲಿ ಕನ್ನಡ ಷಟ್ಪದಿ ಕಾವ್ಯಗಳನ್ನು ಕುರಿತಂತೆ ವಿದ್ವಾಂಸರಿಂದ ಈ ಉಪನ್ಯಾಸವನ್ನು' ನೆರವೇರಿಸಲು ದತ್ತಿಯನ್ನು ಡಾ. ಆರ್. ಲಕ್ಷ್ಮೀನಾರಾಯಣ ಅವರು ಸ್ಥಾಪಿಸಿರುತ್ತಾರೆ.

# ಬಿ.ಎಂ.ಶ್ರೀ ಪ್ರತಿಷ್ಠಾನದಲ್ಲಿ ನಡೆದ ಕಾರ್ಯಕ್ರಮಗಳ ವರದಿ

## ೦೪-೦೨-೨೦೨೧

## ಹಾಸ್ಯಬ್ರಹ್ಮ ಟ್ರಸ್ಟ್ ದತ್ತಿ ಜಾಲಗೋಷ್ಠಿ ಕಾರ್ಯಕ್ರಮ

ಉಪನ್ಯಾಸಕರು : ಶ್ರೀ ವಿ.ರಂಗನಾಥರಾವ್, ತಂತಿ ಇಲಾಖೆ ನಿವೃತ್ತ ಅಧಿಕಾರಿಗಳು

ವಿಷಯ : ಕೈಲಾಸಂ ನಾಟಕಗಳಲ್ಲಿ ಸಾಮಾಜಿಕ ಕಳಕಳಿ ಮತ್ತು ಹಾಸ್ಯ




ಡಾ. ಬಿ.ಸಿ. ರಾಜಕುಮಾರ್ ಅವರು ಜಾಲತಾಣ ಗೋಷ್ಠಿಗೆ ಉಪನ್ಯಾಸಕರನ್ನು ಆಹ್ವಾನಿಸಿ, ಅವರ ಪರಿಚಯವನ್ನು ಮಾಡುವ ಮೂಲಕ ಕಾರ್ಯಕ್ರಮ ಆರಂಭವಾಯಿತು. ಡಾ. ಆರ್. ಲಕ್ಷ್ಮೀನಾರಾಯಣವರು ಹಾಸ್ಯಬ್ರಹ್ಮ ಟ್ರಸ್ಟ್‌ನ ಪದಾಧಿಕಾರಿಗಳು ಪ್ರತಿಷ್ಠಾನದಲ್ಲಿ ಸ್ಥಾಪಿಸಿದ ದತ್ತಿಯ ಧ್ಯೇಯೋದ್ದೇಶಗಳನ್ನು ತಿಳಿಸಿ, ಅದರಂತೆಯೇ ಕಳೆದ ಮೂರು ವರ್ಷಗಳಿಂದ ಕಾರ್ಯಕ್ರಮಗಳನ್ನು ಆಯೋಜಿಸುತ್ತಿರುವ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಿದರು.

ನಂತರ ಶ್ರೀ ರಂಗನಾಥರಾವ್ ಅವರು ಕೈಲಾಸಂ ಅವರ ಜನನ, ವಿದ್ಯಾಭ್ಯಾಸ ಮತ್ತು ಲಂಡನ್ನಿನ ರಾಯಲ್ ಕಾಲೇಜ್ ಆಫ್ ಸೈನ್ಸ್ ನಲ್ಲಿ ಎಂ.ಎ. ಪದವಿ ಮುಗಿಸಿ ೧೯೧೫ರಲ್ಲಿ ಭಾರತಕ್ಕೆ ಬಂದದ್ದು ಹಾಗೂ ಅವರು ಭೂ ಶೋಧಕ ವೃತ್ತಿಯಲ್ಲಿ ನಿರತರಾಗಿದುದನ್ನು ತಿಳಿಸಿದರು. ೧೯೧೮ ರಲ್ಲಿ ಬರೆದ ಅವರ 'ಟೊಳ್ಳು ಗಟ್ಟಿ' ನಾಟಕಕ್ಕೆ ಅಮೆಚೂರ್ ಸಂಘದಿಂದ ಬಹುಮಾನ ಪಡೆದದ್ದನ್ನು ತಿಳಿಸಿ, ಅವರು ಹೇಳಿದ ಕೆಲವು, ಸ್ವಾರಸ್ಯಕರವಾದ ಸಂಭಾಷಣೆಗಳು ನಾಟಕವನ್ನೇ ನೋಡುತ್ತಿರುವಂತೆ ಭಾಸವಾಗುತ್ತಿತ್ತು. ಮದರಾಸಿನಲ್ಲಿ ನಡೆದ ೨೯ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ, ಕೈಲಾಸಂ ಅವರು ತಮ್ಮ ಚೊಕ್ಕ ಭಾಷಣದ ಮೂಲಕ ಎಲ್ಲ ಗಮನ ಸೆಳೆದರು. ೨೦ಕ್ಕೂ ಅಧಿಕ ನಾಟಕಗಳನ್ನು ಬರೆದ ಕೈಲಾಸಂ ಅಭಿನಯ ಚತುರರೂ ಹೌದು ಎಂದು ಹೇಳಿ, 'ಕೈ' ಎಂಬ ಸಂಕ್ಷಿಪ್ತನಾಮದಿಂದಲೂ ಹಾಗೂ 'ಗುಂಡೂ' ಎಂಬ ಕಾವ್ಯ ನಾಮದಿಂದಲೂ ಕನ್ನಡಿಗರೆಲ್ಲರಿಗೂ ಪರಿಚಿತರಾಗಿದ್ದನ್ನು ತಿಳಿಸಿದರು. ಕನ್ನಡ ನಾಟಕಗಳಲ್ಲದೆ ಇಂಗ್ಲೀಷ್ ನಾಟಕಗಳು, ಕಥೆಗಳು ಹಾಗೂ ಕವನಗಳನ್ನೂ ಕೈಲಾಸಂ ರಚಿಸಿರುವುದಾಗಿ ತಿಳಿಸಿ, ಪ್ರಸಿದ್ಧವಾದ ಕೋಳಿಕೆ ರಂಗ ಹಾಡನ್ನು ಹಾಡಿದರು.

ಇವರ ನಾಟಕಗಳ ಜೀವಾಳವೆಂದರೆ ಆಡು ಮಾತಿನ ವೈಶಿಷ್ಟತೆ ಮತ್ತು ಭಾವಗಳ ಪೂರ್ಣತೆಯನ್ನು ಪ್ರೇಕ್ಷಕರಿಗೆ ತೋರಿಸುವುದು. ಅವರ ನಾಟಕಗಳಲ್ಲಿ ಹಾಸ್ಯ ಪ್ರಧಾನವಾಗಿ ಎದ್ದು ಕಾಣುತ್ತಿತ್ತು. ಜೀವನದಲ್ಲಿ ನಡೆಯುವ ಸಂಗತಿಗಳನ್ನು ವಕ್ರದೃಷ್ಟಿ (ಬೇರೆ ಬೇರೆ ದೃಷ್ಟಿಗಳಲ್ಲಿ)ಗಳಿಂದ ನೋಡಬೇಕು ಎಂದು ಹೇಳುತ್ತಿದ್ದ 'ಕೈ' ಅವರು ನಾಟಕಗಳೇ ಇದಕ್ಕೆ ಸಾಕ್ಷಿ ಎನ್ನಬಹುದು. ಕನ್ನಡಂಗ್ಲೋ ಪದಗಳ ಬಳಕೆ ಅವರ ನಾಟಕಗಳಲ್ಲಿ ವಿಶಿಷ್ಟವಾದುದು. ಕನ್ನಡ ರಂಗ ಭೂಮಿ ಅವರ ಕಾಲದಲ್ಲಿ ಸಾಂಪ್ರದಾಯಿಕ ಸಂಕೋಲೆಗಳಿಂದ ತುಂಬಿತ್ತು. ಇವರ ನಾಟಕಗಳು ರಂಗ ಭೂಮಿಗೆ ಹೊಸ ತಿರುವನ್ನು ಕೊಟ್ಟಿತು. ೧೯೪೬ ನವೆಂಬರ್‌ನಲ್ಲಿ ಇವರು ನಿಧನರಾದರು. ಜಾಲತಾಣದಲ್ಲಿ ವೀಕ್ಷಿಸುತ್ತಿದ್ದ ವೀಕ್ಷಕರು ತಮ್ಮ ಅನಿಸಿಕೆಗಳನ್ನು ಶ್ರೀ ರಂಗನಾಥ್ ಅವರೊಂದಿಗೆ ಹಂಚಿಕೊಂಡರು.

ಡಾ. ಬಿ.ಸಿ. ರಾಜಕುಮಾರ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

## ೦೮-೦೨-೨೦೨೧

## ಆ.ನೇ.ಉಪಾಧ್ಯೆ, ಡಿ.ಎಲ್.ಎನ್. ಎಂ.ಜಿ.ನಂಜುಂಡಾರಾಧ್ಯ-ಸೋಸಲೆ ಅಯ್ಯಾಶಾಸ್ತ್ರೀ ದತ್ತಿ ಜಾಲಗೋಷ್ಠಿ ಕಾರ್ಯಕ್ರಮ

ಉಪನ್ಯಾಸಕರು : ಡಾ. ಬಿ.ನಂಜುಂಡ ಸ್ವಾಮಿ, ಪ್ರಸಿದ್ಧ ಸಂಶೋಧಕರು,

ವಿಷಯ : ಎಂ.ಜಿ. ನಂಜುಂಡಾರಾಧ್ಯ : ವ್ಯಕ್ತಿ ಮತ್ತು ಸಾಹಿತ್ಯ

ಪ್ರಾರಂಭದಲ್ಲಿ ಪ್ರಾಸ್ತಾವಿಕ ಮಾತುಗಳನ್ನಾಡಿದ ಡಾ. ಆರ್. ಲಕ್ಷ್ಮೀನಾರಾಯಣ ಅವರು ಈ ಸಂಯುಕ್ತ ದತ್ತಿ ಉಪನ್ಯಾಸ ಕಾರ್ಯಕ್ರಮದ ಅಡಿಯಲ್ಲಿ ಪ್ರತಿಷ್ಠಾನವು ಹಲವಾರು ಕಾರ್ಯಕ್ರಮಗಳನ್ನು ಆ.ನೇ. ಉಪಾಧ್ಯೆ, ಡಿ.ಎಲ್.ಎನ್. ಎಂ.ಜಿ.ನಂಜುಂಡಾರಾಧ್ಯ, ಸೋಸಲೆ ಅಯ್ಯಾ ಶಾಸ್ತ್ರೀ ಅವರುಗಳನ್ನು ಕುರಿತು ನಡೆಸುತ್ತಿರುವುದು ಎಲ್ಲರಿಗೂ ತಿಳಿದದ್ದೇ. ಆಸ್ಥಾನ




ವಿದ್ವಾನ್ ಎಂ.ಜಿ. ನಂಜುಂಡಾರಾಧ್ಯ ಅವರು ಕನ್ನಡ ನಾಡಿನ ಸಾಂಸ್ಕೃತಿಕ ಪರಂಪರೆಯನ್ನು ಶ್ರೀಮಂತಗೊಳಿಸಿದ ಹಿರಿಯ ವಿದ್ವಾಂಸರು. ಐದು ದಶಕಗಳ ಸಾಹಿತ್ಯ ಸೇವೆ ನಂಜುಂಡಾರಾಧ್ಯರದು. ಅದಲ್ಲದೆ, ಇವರು ಕನ್ನಡ, ಸಂಸ್ಕೃತ, ತೆಲುಗು ಮತ್ತು ಹಿಂದಿಯಲ್ಲೂ ಪ್ರೌಢಿಮೆ ಸಂಪಾದಿಸಿದ್ದರು. ಬೆಂಗಳೂರು, ಮೈಸೂರು ಸಂಸ್ಕೃತ ಕಾಲೇಜುಗಳಲ್ಲಿ ಅಲಂಕಾರ, ಶಕ್ತಿ ವಿಶಿಷ್ಟಾದ್ವೈತ ವೀರಶೈವಾಗಮ ಮತ್ತು ವೇದಾಂತ ಪ್ರಕಾರಗಳಲ್ಲೂ ಪ್ರಾಧ್ಯಾಪಕರಾಗಿ ಅಪಾರ ಸೇವೆ ಸಲ್ಲಿಸಿದ್ದಾರೆ. ಇವರು ನಮ್ಮ ನಾಡಿನ ವಿದ್ವತ್ ಪರಂಪರೆಯನ್ನು ಬೆಳೆಸಿಕೊಂಡು ಬಂದ ಮಹನೀಯರು ಎಂದು ತಿಳಿಸಿದರು.

ನಂತರ ಡಾ. ಬಿ.ನಂಜುಂಡ ಸ್ವಾಮಿಯವರನ್ನು ಉಪನ್ಯಾಸಕ್ಕೆ ಸ್ವಾಗತಿಸಿ, ಅವರ ಪರಿಚಯವನ್ನು ಮಾಡಿಕೊಟ್ಟರು. ನಂಜುಂಡಾರಾಧ್ಯರ ನಿಕಟ ಸಂಪರ್ಕದಲ್ಲಿದ್ದ ಡಾ. ಬಿ. ನಂಜುಂಡಸ್ವಾಮಿಯವರು ಅವರನ್ನು ಚೆನ್ನಾಗಿ ಬಲ್ಲವರು ಹಾಗೂ ನಂಜುಂಡಾರಾಧ್ಯರ ಬಹುಮುಖಿ ಸೇವೆಯನ್ನು ಕಂಡವರು. ಈ ದಿನದ ಉಪನ್ಯಾಸಕ್ಕೆ ಇವರು ಸೂಕ್ತವಾದ ವ್ಯಕ್ತಿಯೆಂದು ಹೇಳಿ, ಉಪನ್ಯಾಸ ನಡೆಸಿ ಕೊಡಲು ವಿನಂತಿಸಿದರು.

ನಂಜುಂಡಾರಾಧ್ಯರ ಮಾತಾ ಪಿತೃಗಳ ಅವರ ಜನ್ಮ, ವಿದ್ಯಾಭ್ಯಾಸ,

ವೃತ್ತಿ ಬಗ್ಗೆ ಸಂಕ್ಷಿಪ್ತ ಮಾಹಿತಿನೀಡಿ ೮೨ ವರ್ಷಗಳ ತುಂಬು ಜೀವನ ಮತ್ತು ಸಾರ್ಥಕ ಬದುಕು, ನಂಜುಂಡಾರಾಧ್ಯರದ್ದು ಬಹಳ ಶಿಸ್ತಿನ ವ್ಯಕ್ತಿಯಾಗಿದ್ದರು. ಸಂಸ್ಕೃ ಭಾಷೆಯನ್ನು ಸಾರ್ವತ್ರಿಕಗೊಳಿಸಲು ಅವರು ಪಟ್ಟಕ್ರಮ ಅಷ್ಟಿಷ್ಟಲ್ಲ. ತಮ್ಮ ಮನೆಯಲ್ಲಿಯೇ ಸಂಸ್ಕೃತ ಬೋಧನೆಯನ್ನೂ ಮಾಡಿ ವೀರಶೈವ ವಿದ್ಯಾರ್ಥಿಗಳನ್ನು ಸಂಸ್ಕೃತದತ್ತ ಸೆಳೆಯಲು ಯಶಸ್ವಿಯಾದರು. ಪಠ್ಯಪುಸ್ತಕಗಳ ರಚನೆಯಲ್ಲೂ ಇವರು ಅಪಾರ ಶ್ರದ್ಧೆವಹಿಸಿದ್ದರು. ನಂಜುಂಡಾರಾಧ್ಯರ ಸಾಹಿತ್ಯ ಕೃಷಿಯು, ಕನ್ನಡ ಸಂಸ್ಕೃತ ಮತ್ತು ಹಿಂದಿ ಭಾಷೆಗಳನ್ನೊಳಗೊಂಡಿದೆ. ಹಾಗೂ ನೂರಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿದ್ದಾರೆ. ಅದಲ್ಲದೆ ಎರಡು ಸ್ವತಂತ್ರ ನಾಟಕಗಳನ್ನೂ ರಚಿಸಿದ್ದಾರೆ. ಇವರು ಸಂಪಾದಿಸಿದ "ಬಸವಪ್ಪ ಶಾಸ್ತ್ರಿಗಳ ಸಮಗ್ರ ಕೃತಿಗಳು" ಒಂದು ಬೃಹತ್ ಗ್ರಂಥ. ಮೇರು ಕೃತಿಯೂ ಹೌದು.

ನಂಜುಂಡಾರಾಧ್ಯರೊಡನೆ ಹಲವಾರು ವಿಷಯಗಳಲ್ಲಿ ತಮ್ಮ ಒಡನಾಟವನ್ನು ಸ್ವಾರಸ್ಯಕರವಾಗಿ ಉಪನ್ಯಾಸಕರು ಹಂಚಿಕೊಂಡದ್ದು ವಿಶೇಷವಾಗಿತ್ತು. ಇದಲ್ಲದೆ ಹಲವು ವಿದ್ವಾಂಸರು ನಂಜುಂಡಾರಾಧ್ಯರ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದನ್ನೂ ಸಂಕ್ಷಿಪ್ತವಾಗಿ ತಿಳಿಸಿ, ಅವರ ವ್ಯಕ್ತಿತ್ವದ ಬಗ್ಗೆ ಮತ್ತು ಸಾಧನೆಗಳ ಬಗ್ಗೆ ಬೆಳಕು ಚೆಲ್ಲಿದರೂ ಸಂವಾದ/ಪ್ರಶ್ನೋತ್ತರ ಅವಧಿಯಲ್ಲಿ ನಂಜುಂಡಾರಾಧ್ಯರ ಕುಟುಂಬ ವರ್ಗದವರು ಮತ್ತು ಅವರ ಅಭಿಮಾನಿಗಳೂ ಭಾಗವಹಿಸಿದ್ದು, ಪ್ರತಿಷ್ಠಾನಕ್ಕೆ ವಂದನೆ ಸಲ್ಲಿಸಿದರು.

ಡಾ. ಬಿ.ಸಿ. ರಾಜಕುಮಾರ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮವು ಮುಕ್ತಾಯವಾಯಿತು.

---

ಕಿರುಪರಿಚಯ

## ಗಾಯತ್ರಿ ಇಂದಾವರ



ಶ್ರೀಮತಿ ಗಾಯತ್ರಿ ಇಂದಾವರ ಅವರು ಸಂಖ್ಯಾಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದು ೧೨ ವರ್ಷಗಳ ಕಾಲ ಸಾಫ್ಟವೇರ್ ಇಂಜನಿಯರ್ ಆಗಿ ಸೇವೆ ಸಲ್ಲಿಸಿ, ಕೆಲವು ಕಾಲ ಎಂ. ಬಿ. ಎ ವಿದ್ಯಾರ್ಥಿಗಳಿಗೆ ಅಧ್ಯಾಪನ ಮಾಡಿದವರಾಗಿರುತ್ತಾರೆ. ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದಿಂದ ಸಂಸ್ಕೃತ ವಿಷಯದಲ್ಲಿ ಎಂ.ಏ. ಪದವಿಯನ್ನು ಗಳಿಸಿರುತ್ತಾರೆ

ಚಿಕ್ಕ ವಯಸ್ಸಿನಿಂದಲೇ ಸಾಹಿತ್ಯ, ಸಂಗೀತ, ನೃತ್ಯ ಮುಂತಾದ ಕಲೆಗಳಲ್ಲಿ ಅತೀವ ಆಸಕ್ತಿಯನ್ನು ಹೊಂದಿದ್ದು, ದಿ. ಶ್ರೀ ವೆಂಕಟರಾಮಯ್ಯನವರು, ಶ್ರೀಮತಿ ಲಕ್ಷ್ಮೀನರಸಮ್ಮನವರು, ಶ್ರೀಮತಿ ರಾಜಶ್ರೀ ಅರವಿಂದ್ ಅವರಿಂದ ಸಂಗೀತದ ಕಲಿಕೆಯಾಗಿದೆ. ತಾಯಿ ದಿ.ಶ್ರೀಮತಿ ಇಂದಿರಾ ವೆಂಕಟೇಶ್ ಅವರಿಂದ ಗಮಕಕಲೆಯಲ್ಲಿ ಪ್ರವೇಶ, ಪ್ರೌಢ ಪರೀಕ್ಷೆಗಳಿಗೆ ಶಿಕ್ಷಣ ಪಡೆದಿರುತ್ತಾರೆ. ಶ್ರೀಮತಿ ರೂಪಶ್ರೀ ಮಧುಸೂದನರಿಂದ ಭರತನಾಟ್ಯದ ಶಿಕ್ಷಣವನ್ನೂ ಪಡೆದಿರುತ್ತಾರೆ.

ಸಾಂಸ್ಕೃತಿಕ ಕ್ಷೇತ್ರದಲ್ಲಿ ಅಖಿಲ ಭಾರತೀಯ ಸಂಸ್ಥೆಯಾದ 'ಸ್ಪಿಕ್ ಮೇಕೆ'ಯ ಕರ್ನಾಟಕ ಶಾಖೆಗೆ ಉಪಾಧ್ಯಕ್ಷೆಯಾಗಿ ಪ್ರಖ್ಯಾತ ಸಂಸ್ಥೆಗಳಲ್ಲಿ ಹಾಗೂ ಅನೇಕ ಶಾಲಾ ಕಾಲೇಜುಗಳಲ್ಲಿ (ಗ್ರಾಮೀಣ ಪ್ರದೇಶಗಳಲ್ಲಿ ಕೂಡ) ಭಾರತದ ಅತ್ಯುತ್ತಮ ಕಲಾವಿದರಿಂದ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಆಯೋಜಿಸಿರುವ ಅನುಭವವಿದೆ. ಶತಾವಧಾನಿ ಶ್ರೀ ಆರ್ ಗಣೇಶ ಅವರ ಮಾರ್ಗದರ್ಶನ ಪಡೆದು ಹಲವಾರು ಅವಧಾನಗಳಲ್ಲಿ ಪೃಚ್ಛಕಳಾಗಿ ಭಾಗವಹಿಸಿರುತ್ತಾರೆ.

---

## ವಿದುಷಿ ಶ್ರೀಮತಿ ನವ್ಯ ನಾಗರಾಜ್



ವಿದುಷಿ ನವ್ಯನಾಗರಾಜ್‌ರವರು ತಮ್ಮ ಐದನೇ ವಯಸ್ಸಿನಿಂದಲೇ ಕರ್ನಾಟಕ ಶಾಸ್ತ್ರೀಯ ಸಂಗೀತವನ್ನು ಗುರುಗಳಾದ ವಿದುಷಿ ಪದ್ಮಾ ಗುರುದತ್, ವಿದುಷಿ ವಸಂತ ರಾಮಾನುಜಂ, ವಿದ್ವಾನ್ ರಾವ್ ಆರ್. ಶರತ್ ರವರಲ್ಲಿ ಕಲಿತು ೫೦ಕ್ಕೂ ಹೆಚ್ಚು ಕಛೇರಿಗಳನ್ನು ನಡೆಸಿಕೊಟ್ಟಿದ್ದಾರೆ. ಪಂಡಿತ್ ನರಹರಿ ದೀಕ್ಷಿತ್‌ರವರಲ್ಲಿ ಸುಗಮ ಸಂಗೀತದ ಅಭ್ಯಾಸ ಮಾಡಿ ತಮ್ಮ ಸುಶ್ರಾವ್ಯ ಕಂಠಸಿರಿಯಿಂದ ಅಭಿಮಾನಿಗಳನ್ನು ರಂಜಿಸಿದ್ದಾರೆ

ಪಿಇಎಸ್ ಕಾಲೇಜಿನಲ್ಲಿ ಬಿ.ಇ ಶಿಕ್ಷಣ ಪಡೆದ ಇವರು ಜೈನ್ ವಿಶ್ವವಿದ್ಯಾನಿಲಯದಿಂದ "ಕರ್ನಾಟಕ ಶಾಸ್ತ್ರೀಯ ಸಂಗೀತ"ದಲ್ಲಿ ಎಂ.ಎ ಮತ್ತು ಎಂ.ಫಿಲ್ ಪದವಿಗಳನ್ನು ಗಳಿಸಿದ್ದಾರೆ. ಪ್ರತಿಷ್ಠಿತ ಶ್ರೀರಾಮ ಸೇವಾ ಮಂಡಲಿಯ ೮೧ನೇ ರಾಮನವಮಿ ಸಂಗೀತೋತ್ಸವದ ಪ್ರತಿಭಾಕಾಂಕ್ಷಿ ಗಾಯನ ಸ್ಪರ್ಧೆಯಲ್ಲಿ ಭಾಗವಹಿಸಿ, "ಪ್ರತಿಭಾಕಾಂಕ್ಷಿ ಪುರಸ್ಕಾರ"ವನ್ನು ತಮ್ಮದಾಗಿಸಿಕೊಂಡಿದ್ದಾರೆ. ರಾಜ್ಯಾದ್ಯಂತ ಯಶಸ್ವಿಯಾಗಿ ಕಛೇರಿಗಳನ್ನು ನಡೆಸಿಕೊಟ್ಟ ಗರಿಮೆ ಇವರದ್ದು.

ಡಾ. ಎಲ್. ಸುಬ್ರಮಣ್ಯ ಅಕಾಡೆಮಿ ಫಾರ್ ಪರ್‌ಫಾರ್ಮಿಂಗ್ ಆರ್ಟ್ಸ್ (ಎಸ್.ಎ.ಪಿ.ಎ)ಸಂಸ್ಥೆಯಲ್ಲಿ ಸಂಗೀತ ಶಿಕ್ಷಕರಾಗಿ ಕಾರ್ಯನಿರ್ವಹಿಸಿದ್ದಾರೆ. ಶಾಸ್ತ್ರೀಯ ಸಂಗೀತ ಹಾಗೂ ಸುಗಮ ಸಂಗೀತವನ್ನು ತಮ್ಮ ಮನೆಯಲ್ಲಿ ಹಾಗೂ ಆನ್‌ಲೈನ್ ಮೂಲಕ ನೂರಾರು ಮಕ್ಕಳಿಗೆ ಹೇಳಿಕೊಡುವ ಮೂಲಕ ಸಂಗೀತ ಸೇವೆ ಮಾಡುತ್ತಿದ್ದಾರೆ.

---

## ಡಾ. ಎನ್.ಆರ್. ಲಲಿತಾಂಬ



ಇವರು ಸರ್ಕಾರಿ ಪ್ರಥಮ ದರ್ಜೆ ಕಾಲೇಜು ವಿಜಯನಗರ ಬೆಂಗಳೂರಿನಲ್ಲಿ ಸಹ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಕನ್ನಡ ಎಂ.ಎ. (ನಾಲ್ಕು ಚಿನ್ನದ ಪದಕಗಳೊಂದಿಗೆ ಪ್ರಥಮ ರ್‍ಯಾಂಕ್), ಪಿಎಚ್.ಡಿ. ಪಡೆದಿರುವ ಡಾ. ಲಲಿತಾಂಬಾ ಅವರು ಹೆಚ್ಚುವರಿಯಾಗಿ ಶಾಸನಶಾಸ್ತ್ರ ಡಿಪ್ಲೊಮಾ, ಹಸ್ತಪ್ರತಿ ಶಾಸ್ತ್ರ ಡಿಪ್ಲೊಮೊ, ಪ್ರಾಕೃತ ಡಿಪ್ಲೊಮಾ ಗಳನ್ನೂ ಗಳಿಸಿಕೊಂಡಿದ್ದಾರೆ. ಜೊತೆಗೆ 'ವಿಜಯನಗರೋತ್ತರ ಕಾಲದ ಕನ್ನಡ ಹಾಗೂ ಕೈಫಿಯತ್ತುಗಳ ಭಾಷಿಕ ಅಧ್ಯಯನ' ವನ್ನು ಮಾಡಿದ್ದಾರೆ.

ಇವರಿಗೆ ಮುರಳಿಧರ ಸ್ಮಾರಕ ಅತ್ಯುತ್ತಮ ವಿದ್ಯಾರ್ಥಿ ಪ್ರಶಸ್ತಿ, ಪ್ರೊ. ತೀ.ನಂ. ಶ್ರೀಕಂಠಯ್ಯ ಚಿನ್ನದ ಪದಕ, ಶ್ರೀ ಟಿ.ಆರ್. ಶಾಮಣ್ಣ ಚಿನ್ನದ ಪದಕ , ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘ ಗೋಲ್ಡನ್ ಜ್ಯೂಬಿಲಿ ಚಿನ್ನದ ಪದಕ, ಡಾ. ರಾಜ್ ಕುಮಾರ್ ಸನ್ಮಾನ ಸಮಿತಿ ಚಿನ್ನದ ಪದಕ, 'ಶಿಕ್ಷಣ ರತ್ನ' ಪ್ರಶಸ್ತಿ, ಅಂಧ ಮಕ್ಕಳಿಗೆ ಮಾಡುತ್ತಿರುವ ಸೇವೆಯನ್ನು ಪರಿಗಣಿಸಿ "ಶಾಂತಿಪ್ರಿಯ ಗೌತಮ ಬುದ್ಧ ಸದ್ಭಾವನಾ ಪ್ರಶಸ್ತಿ", "ಬೆಸ್ಟ್ ಟೀಚರ್ ಅವಾರ್ಡ್-ಬೆಂಗಳೂರು ಜಿಲ್ಲೆ"- ಐ.ಡಿ.ಎಲ್. ಫೌಂಡೇಷನ್ ಬೆಂಗಳೂರು ಈ ಗೌರವಗಳು ಸಂದಿವೆ.

ಪ್ರಕಟಣೆಗಳು : ೧೫ ಲೇಖನಗಳು, ೫ ಕಥೆಗಳು, ೩೦ಕ್ಕೂ ಹೆಚ್ಚು ಸಂಶೋಧನಾ ಪ್ರಬಂಧಗಳು ಹಾಗೂ ಇತರ ಕೃತಿಗಳು

ಭಾಗವಹಿಕೆ : ರಾಜ್ಯ ಹಾಗೂ ರಾಷ್ಟ್ರ ಮಟ್ಟದ ವಿಚಾರ ಸಂಕಿರಣಗಳು, ಸಮ್ಮೇಳನಗಳು, ಕಮ್ಮಟಗಳು, ಗೋಷ್ಠಿಗಳಲ್ಲಿ, ಅಧ್ಯಾಪಕರ ಪುನರ್ಮನನ ಶಿಬಿರಗಳಲ್ಲಿ(ಗಂಗೋತ್ರಿ ಸ್ಟಾರ್ಫ ಕಾಲೇಜ್). ಸಂಶೋಧನಾ ವಿದ್ಯಾರ್ಥಿಗಳ ಕಮ್ಮಟಗಳು (ಸಿ.ಐ.ಎಲ್. ಗಂಗ್ರೋತ್ರಿ) ಸಂಪನ್ಮೂಲವ್ಯಕ್ತಿಯಾಗಿ ಭಾಗವಹಿಸಿದ್ದಾರೆ.

ಹಿಂದಿನ ಸಂಚಿಕೆಯಿಂದ

ದೇಶದ ಬಿಡುಗಡೆಗೆ ಹಗಲಿರುಳು ಹೋರಾಡುತ್ತಿದ್ದ ಗಾಂಧೀಜಿಯವರ ಸಾರ್ವಜನಿಕ ಬದುಕಿನ ಆಗುಹೋಗುಗಳಿಗೆ ಈ ಕವಿ ತೀವ್ರವಾಗಿ ಸ್ಪಂದಿಸುತ್ತಾರೆ. ಏಕೆಂದರೆ ಸ್ವಾತಂತ್ರ್ಯಹೋರಾಟ–ಗಾಂಧಿ ಅಭಿನ್ನರು, ಅವೆರಡೂ ಸಮಾನಾರ್ಥಕ ಶಬ್ದಗಳು. ೧೯೪೨ ರ ಆಗಸ್ಟ್‌ನಲ್ಲಿ ಗಾಂಧೀಜಿಯ ಬಂಧನವಾದಾಗ, ಅನಾರೋಗ್ಯದ ನಿಮಿತ್ತ ೧೯೪೪ ರ ಮೇನಲ್ಲಿ ಅವರ ಬಿಡುಗಡೆಯಾದಾಗ, ಅವರ ನಿಧನದಿಂದ ಗದ್ಗದಿತರಾಗಿ, ಅವರ ಸಾವಿನ ನಂತರ ಬಂದ ಯುಗಾದಿಯಂದು ಅವರನ್ನು ನೆನಪಿಸಿಕೊಂಡು, ಆ ಮುಂದೆಯೂ ಅವರನ್ನು ಕುರಿತು ಹಾಡುವಾಗ ಕವಿ ಬಾಪುವಿನ ಬಗ್ಗೆ ಇರಿಸಿಕೊಂಡಿದ್ದ ಭಕ್ತಿ–ಗೌರವಗಳು ಪ್ರವಾಹವಾಗಿ ಹರಿದಿದೆ. ಅವರು ಹತ್ಯೆಗೊಂಡಾಗ ಕವಿ ಅವರನ್ನು 'ಸ್ವಾತಂತ್ರ್ಯ ಕಲ್ಪವೃಕ್ಷ' ಎಂದು ಬಣ್ಣಿಸುತ್ತಾರೆ.

ಸತ್ಯ ಅಹಿಂಸೆಯ ಬೀಜಮಂತ್ರವನು<br>
ಬಿತ್ತಿದನಾ ನಾಡಿನ ತಂದೆ;<br>
ಹತ್ಯನಾದನಲ ಸ್ವಾತಂತ್ರ್ಯದ ಸಸಿ<br>
ಬೆಳೆದುದು ತಾ ನೋಡುವ ಮುಂದೆ

ಎಂದು ಕವಿ ಕಂಬನಿ ಮಿಡಿಯುತ್ತಾರೆ. ಗಾಂಧಿಜಿಯವರಲ್ಲದೆ ದೇಶದ ಬಿಡುಗಡೆಗೆ ತನುಮನಧನವ ತೆತ್ತವರ ಸಂಖ್ಯೆ ದೊಡ್ಡದು. ಅವರಲ್ಲಿ ಅನೇಕ ಧೀಮಂತರಿದ್ದಾರೆ; ಇಂತಹ ನೆಹರು, ರಾಧಾಕೃಷ್ಣನ್, ಸರೋಜಿನೀದೇವಿ, ಸುಭಾಷರು ಮುಂತಾದ ಸ್ವಾತಂತ್ರ್ಯ ಸೇನಾನಿಗಳ ಬಗ್ಗೆಯೂ ಎಂವಿಸೀ ಗೀತನಮನ ಸಲ್ಲಿಸಿದ್ದಾರೆ.

ಮಿಕ್ಕೆಲ್ಲರೂ ದೇಶವಿಭಜನೆಯನ್ನು ಕುರಿತು ತೀವ್ರ ವಿಷಾದ ವ್ಯಕ್ತಪಡಿಸಿದರೂ, ಈ ಕವಿ ಮಾತ್ರ, ಮೊದಲು "ಬಂತು ಬಂತು ಸ್ವಾತಂತ್ರ್ಯವೆಂಬ ಸವಿ ಮಾತ ಮಳೆಯಾಯ್ತು; ಎಂತದನುಳಿಸುವುದೆನ್ನುವನಿತರೊಳೆ ನಾಡೇ ಹೋಳಾಯ್ತು" ಎಂದು ಮರುಗಿದರೂ, "ನಾವು ಸೋದರ–ರಿಂದು ಬೇರಾದರೇನಂತೆ, ಮನವೊಡೆಯದಂತೆ ಮನೆಯೊಡೆಯದಂತೆ ಮತ್ತೆ ಬೆರೆಯೋಣ, ಹೊಸ ಬಾಳ ತೆರೆಯೋಣ" ಎಂಬ ಆಶಾಭಾವನೆಯನ್ನು ವ್ಯಕ್ತಪಡಿಸುವುದು ಅಪರೂಪವಾಗಿದೆ.

ಅಂತೆಯೇ ಕವಿಯ ಕನ್ನಡ ಪ್ರೇಮ. "ಕನ್ನಡ ಚೆನ್ನು! ಕನ್ನಡ ಚೆನ್ನು! ಕನ್ನಡವೆನ್ನಯ ಬಾಳಿನ ಕಣ್ಣು" ಎಂದು ಘೋಷಿಸಿಕೊಳ್ಳುವ ಕವಿಯು,



# ಎಂ.ವಿ.ಸಿ. ಬದುಕು ಬರಹ – ೧೪

"ಕನ್ನಡ ಕನ್ನಡ ಇದೆನ್ನ ಜಪವು! ಕನ್ನಡ ಸೇವೆಯೆ ಜನ್ಮದ ತಪವು" ಎಂದು ತಮ್ಮ ಬದುಕಿನ ಧ್ಯೇಯವನ್ನು ಕುರಿತು ಹೇಳಿಕೊಳ್ಳುತ್ತಾರೆ. ಹೀಗಾಗಿ ಕನ್ನಡಕ್ಕೆ ಕುತ್ತು ಬಂದಂತೆನಿಸಿದಾಗ ಈ ಕವಿ ಕಿನಿಸಿಸುತ್ತಾರೆ:

ಕನ್ನಡತನವನು ತೆರೆದರೆ ನಾವು<br>
ತಿಳಿಯಿರಿ, ನಮಗಂದೇ ಸಾವು<br>
.. .. .. .. .. .. .. .. .. .. .. ..<br>
ಕನ್ನಡ ಬರಹಕೆ ಕನ್ನಡದೋದಿಗೆ<br>
ಮನ್ನಣೆ ಕೊಡದರು ಕನ್ನಡರೆ?<br>
ಕನ್ನಡ ಹಾಡಿಗೆ ಕಿವಿ ತೆರೆಯದ ಜನ<br>
ಕನ್ನಡ ಬಸಿರಲಿ ಬಂದವರೆ?

ಎಂದು ಕಟುವಾಗಿ ಪ್ರಶ್ನಿಸುತ್ತಾರೆ. "ಕನ್ನಡ ತಾಯಿಗೆ ಮಣಿವ– ನಾವ್ ಕನ್ನಡಿಗರೆಂದು ಕುಣಿವ" ಎಂದು ಮನದುಂಬಿ ಕನ್ನಡಿಗನೆಂಬ ಹೆಮ್ಮೆಯನ್ನು ಮರೆಯುವ ಕವಿ "ಶಿಲೆಯೆಲ್ಲ ಕಲೆಯೆ ಈ ನಾಡಿನಲಿ ಕಲೆಯೆಲ್ಲ ಚೆಲುವೆ ಹೊನ್ನಾಡಿನಲಿ" ಎಂದು ನಾಡಪ್ರೇಮವನ್ನು ತೋರುತ್ತಾರೆ. ಆದರೆ ದೇಶಕ್ಕೆ ಸ್ವಾತಂತ್ರ್ಯ ಬಂದರೂ ನಾಡಿಗೆ ಒಡಗೂಡುವ ಪುಣ್ಯ ಒದಗದಿರಲು ಕವಿ ಕಂಗಾಲಾಗುತ್ತಾರೆ: "ಎಂದಿಗೆ ಕೂಡುವುದೀ ನಾಡು, ಮೊಳಗುವುದೊಕ್ಕೂಟದ ಹಾಡು" ಎಂದು ಹಂಬಲಿಸುತ್ತಾರೆ. ಅಂತೂ ಕನ್ನಡ ನಾಡು ಒಂದಾಗುತ್ತದೆ. "ಕನ್ನಡದ ಮನೆಯೊಂದೆ, ಒಂದೆ ಕನ್ನಡ ಕುಲ – ಚಿನ್ನದೆಳೆಕಟ್ಟಿದುವೆ ನಮಗೆ ಶ್ರೀರಕ್ಷೆ, ಬಲ: ಭನ್ನವಾಗದೆ ಬದುಕಿ ನೂರು ಸಾವಿರ ಕಾಲ ಕನ್ನಡದ ಕೀರ್ತಿಯನು ಹಬ್ಬಿಸಲು ಜಗದಗಲ" ಎಂದು ಸಂತಸಗೊಳ್ಳುತ್ತಾರೆ. "ಹತ್ತು ಕಡೆ ಹಂಚಿ ವಂಚಿತರಾದ ನಾವಿಂದು" ಒಂದಾಗಿರುವ ಸಂದರ್ಭದಲ್ಲಿ ಕವಿ, "ಕ್ಷುದ್ರಭಾವನೆ ಭೇದಗಳು ಮರಳಿ ಈ ನಾಡ ಛಿದ್ರಗೈಯದ ರೀತಿ, ಓ ತಾಯೆ, ಕಾಪಾಡ' ಎಂದ ಪ್ರಾಂಜಲತೆಯಿಂದ ಬೇಡಿಕೊಳ್ಳುತ್ತಾರೆ.

**ಮುಂದುವರಿಯುವುದು**

ಕಿರುಪರಿಚಯ

## ಶ್ರೀಮತಿ ಬಿ.ಜಿ.ಕುಸುಮ

ವಿಜ್ಞಾನ ಶಿಕ್ಷಣದಲ್ಲಿ ಅತೀವ ಶ್ರದ್ಧೆ ಮತ್ತು ಕಲೆಯಲ್ಲಿ ಅಪಾರ ಆಸಕ್ತಿ ಇವೆರಡರ ಸಾಂಗತ್ಯಕ್ಕೆ ಶ್ರೀಮತಿ ಬಿ.ಜಿ.ಕುಸುಮಾ ಅವರ ವ್ಯಕ್ತಿತ್ವವೇ ಒಂದು ಉತ್ತಮ ಉದಾಹರಣೆ. ಲೋಕದ ಆಗುಹೋಗುಗಳನ್ನು ವೈಚಾರಿಕ ದೃಷ್ಟಿಕೋನದಿಂದ ವಿಶ್ಲೇಷಿಸುವ ಎಚ್ಚರ ಮತ್ತು ಸಾಹಿತ್ಯ, ಸಂಗೀತ, ಗಮಕ ಇವುಗಳನ್ನು ಅಸ್ವಾದಿಸುವ ಸಂವೇದನೆ ಇವೆರಡರ ಹದವರಿತ ಮಿಶ್ರಣ ಅಲ್ಲಿ ಹಾಸುಹೊಕ್ಕಾಗಿದೆ. ಕಳೆದ ಇಪ್ಪತ್ತೈದು ವರ್ಷಗಳಿಂದಲೂ ಪ್ರತಿಫಲಾಪೇಕ್ಷೆಯಿಲ್ಲದೆ ಬೆಂಗಳೂರಿನಲ್ಲಿ ಮಕ್ಕಳಿಗೆ ಬೇಸಿಗೆ ವಿಜ್ಞಾನ ಶಿಬಿರಗಳನ್ನು ನಿರಂತರ ನಡೆಸುತ್ತಿರುವ ಅವರ ಬದ್ಧತೆ, ನಾಳೆಯ ಪೀಳಿಗೆಯಲ್ಲಿ ವೈಜ್ಞಾನಿಕ ಮನೋಭಾವವನ್ನು ಬಿತ್ತುವ ಹಂಬಲ ಹೊಂದಿದೆ. ಹಾಗೆಯೇ ಪ್ರಸಿದ್ಧ ಗಮಕಿಗಳ ಕಾವ್ಯವಾಚನಕ್ಕೆ ವ್ಯಾಖ್ಯಾನ ಮಾಡುವ ಅವರ ಆಸಕ್ತಿ, ಕನ್ನಡದ ಶ್ರೇಷ್ಠ ಕೃತಿಗಳ ಸಾರವನ್ನು ಶ್ರೀ ಸಾಮಾನ್ಯರಿಗೂ ತಲುಪಿಸುವ ಆಶಯ ಹೊಂದಿದೆ. ವಯಸ್ಸು ಎಂಬತ್ತು ದಾಟಿದ ನಂತರವೂ ಅವರಲ್ಲಿ ಈ ಹಂಬಲ ಮತ್ತು ಆಸಕ್ತಿ ಕುಂದದೇ ಉಳಿದಿವೆ ಎನ್ನುವುದೇ ಅವರ ಜೀವನೋತ್ಸಾಹವನ್ನು ಸಾರುತ್ತದೆ.

ಶಿಕ್ಷಕಿ, ಸಂಘಟಕಿ, ವಿಜ್ಞಾನ ಪ್ರಚಾರಕಿ, ಸಾಮಾಜಿಕ ಕಾರ್ಯಕರ್ತೆ ಮತ್ತು ಕಾವ್ಯವಾಚನ ವ್ಯಾಖ್ಯಾನಕಾರ್ತಿ ಕುಸುಮಾ ಅವರ ಚಿಂತನೆ ಸದಾ ಜನರ ಒಳಿತನ್ನು ಬಯಸುತ್ತದೆ. ಸಮಾಜದಲ್ಲಿ ಬಡ ಹೆಣ್ಣುಮಕ್ಕಳ ಶಿಕ್ಷಣಕ್ಕೆ, ಮಹಿಳೆಯರ ಆರೋಗ್ಯ ರಕ್ಷಣೆಗೆ ಸ್ಪಂದಿಸಲೆಂದೇ ಅವರು ಒಂದು ಸಾಮಾಜಿಕ ಸೇವಾ ಟ್ರಸ್ಟ್ ಸ್ಥಾಪಿಸಿದ್ದಾರೆ. ಜನಸೇವೆ ಮಾಡುವ ಆಸ್ಪತ್ರೆಗಳ ಅಗತ್ಯಕ್ಕೆ ನೆರವಾಗುತ್ತಿದ್ದಾರೆ. ವಿಜ್ಞಾನ ವಿಷಯಗಳನ್ನು ಕುರಿತು ಸರಳ ಭಾಷೆಯಲ್ಲಿ ಲೇಖನಗಳನ್ನು ಬರೆಯುವ ಅವರು ಕನ್ನಡ ಮಹಾಕಾವ್ಯಗಳ ರಸಪ್ರಸಂಗಗಳನ್ನು ನಮ್ಮ ಮುಂದಿಟ್ಟಿದ್ದಾರೆ. ಮಕ್ಕಳ ಕಥೆಗಳ ಅವರ ಎರಡು ಸಂಗ್ರಹಗಳು. ಬದುಕಿಗೆ ಬೇಕಾದ ಸಂಗತಿಗಳನ್ನು ಅವರಿಗೆ ತಿಳಿಸಿಕೊಡುತ್ತವೆ. ಕುಸುಮಾ ಅವರ ಬಹುಮುಖ ಆಸಕ್ತಿಗೆ 'ವ್ಯಾಖ್ಯಾನ ವಿಶಾರದೆ' ಬಿರುದು. ಗಾರ್ಗಿ ಪ್ರಶಸ್ತಿ. ಎನ್‌ಸಿಇಆರ್‌ಟಿ ಪ್ರಶಸ್ತಿ ಮುಂತಾದವು ಸಂದಿವೆ.




# ಪತ್ರಿಕಾ ನೆನಪು





## ಹಳಗನ್ನಡ ಸಾಹಿತ್ಯ ಕಡಿಮೆ ಆಗುತ್ತಿದೆ



ಬಿಎಂಶ್ರೀ ಪ್ರತಿಷ್ಠಾನದ ವತಿಯಿಂದ ಭಾನುವಾರ ಆಯೋಜಿಸಿದ್ದ ಸಮಾರಂಭದಲ್ಲಿ ಕವಿ ಪ್ರೊ. ಜಿ.ಎಸ್.ಸಿದ್ದಲಿಂಗಯ್ಯ ಅವರಿಗೆ ಸಾಹಿತಿ ಹಂ.ಪ. ನಾಗರಾಜಯ್ಯ ಅವರು 'ಶ್ರೀ ಸಾಹಿತ್ಯ ಪ್ರಶಸ್ತಿ' ಪ್ರದಾನ ಮಾಡಿದರು. ಸಿದ್ದಲಿಂಗಯ್ಯನವರ ಪತ್ನಿ ಎಸ್.ಕೆ.ಪ್ರೇಮಾ, ಡಾ. ಆರ್.ಲಕ್ಷ್ಮೀನಾರಾಯಣ ಮತ್ತಿತರರು ಉಪಸ್ಥಿತರಿದ್ದರು.



## ಧರ್ಮವನ್ನು ಮುನ್ನಡೆಸುವವರಿಂದ ಸಂಕಷ್ಟ

ಡಾ.ಎಸ್.ಎಲ್. ಶ್ರೀನಿವಾಸಮೂರ್ತಿ ಬೇಸರ | ಡಾ. ಬಾಲೂರಾವ್ ಪ್ರಶಸ್ತಿ ಪ್ರದಾನ



## రచనలే జీవితంగా సిద్ధలింగయ్య ప్రస్థానం

- 'శ్రీ' సాహిత్య పురస్కార ప్రదాన కార్యక్రమంలో డాక్టర్ రుద్రేశ్ అదరంగి

వేదికపై సిద్ధలింగయ్య దంపతులు, ఫౌండేషన్ సభ్యులు తదితరులు

బెంగళూరు, జనవరి 10 (ఆంధ్రజ్యోతి):



## 'ಧರ್ಮಗಳನ್ನು ಮುನ್ನಡೆಸುವ ಕೈಗಳಿಂದ ಕಟ್ಟುಪಾಡು'

ಕಿರುಪರಿಚಯ

## ಶ್ರೀಮತಿ ಯೋಗ ಕೀರ್ತನ



ಶ್ರೀಮತಿ ಜೆ.ಕೆ. ಯೋಗ ಕೀರ್ತನರವರು ಉನ್ನತ ಶ್ರೇಣಿಯ ಹಾಡುಗಾರ್ತಿ ಸಾಹಿತ್ಯ ಮತ್ತು ಸಾಂಸ್ಕೃತಿಕ ಹಿನ್ನೆಲೆಯ ಕುಟುಂಬದಿಂದ ಬಂದಿರುವ ಇವರು ಕರ್ನಾಟಕ ಶಾಸ್ತ್ರೀಯ ಸಂಗೀತ ಕಲಾವಿದೆ.

ಕರ್ನಾಟಕ ಶಾಸ್ತ್ರೀಯ ಸಂಗೀತ ಹಿರಿಯ, ಕಿರಿಯ ಪರೀಕ್ಷೆಯನ್ನು ಉನ್ನತ ಶ್ರೇಣಿಯಲ್ಲಿ ತೇರ್ಗಡೆ. ಇತ್ಯಾದಿಗಳೊಂದಿಗೆ ವಿವಿಧ ಸಂಗೀತ ಕಾರ್ಯಕ್ರಮಗಳಲ್ಲಿ ಸಾಕಷ್ಟು ಹೆಸರು ಮಾಡಿರುವ ಶ್ರೀಮತಿ ಯೋಗ ಕೀರ್ತನರವರು ಹಲವು ಕರ್ನಾಟಕ ಶಾಸ್ತ್ರೀಯ ಸಂಗೀತ ಸ್ಪರ್ಧೆಗಳಲ್ಲಿ ಬಹುಮಾನವನ್ನು ಪಡೆದಿದ್ದಾರೆ.

ಇವರಿಗೆ ೨೦೧೮ರಲ್ಲಿ ಅತ್ಯುತ್ತಮ ಸಂಗೀತ ಹಾಡುಗಾರಿಕೆ ಪ್ರಶಸ್ತಿ, ೨೦೧೩ ರಲ್ಲಿ ಆಕಾಶವಾಣಿ ಸ್ಪರ್ಧೆಯಲ್ಲಿ 'ಬಿ' ಪ್ರಮಾಣ ಪತ್ರ, ಎಂ.ಎಸ್. ಸುಬ್ಬಲಕ್ಷ್ಮೀ ಫೆಲೋಶಿಪ್ ಇನ್ ಮ್ಯೂಸಿಕ್ ಹಾಗೂ ತುಂಬುರ ಪ್ರಶಸ್ತಿ.

ರಾಷ್ಟ್ರ ಮತ್ತು ಅಂತರಾಷ್ಟ್ರೀಯ ವೇದಿಕೆಗಳಲ್ಲಿ ಕಾರ್ಯಕ್ರಮಗಳನ್ನು ಶ್ರೀಮತಿ ಯೋಗ ಕೀರ್ತನರವರು ನಡೆಸಿಕೊಟ್ಟಿದ್ದಾರೆ.

ಶ್ರದ್ಧಾಂಜಲಿ

## ಹೊ.ರಾ. ಸತ್ಯನಾರಾಯಣರಾವ್

೨೮-೨-೧೯೩೦- ೩೧-೦೧-೨೦೨೧



ಕೋಲಾರ ಜಿಲ್ಲೆಯಲ್ಲಿ ಹುಟ್ಟಿದ ಹೊ. ರಾ. ಸತ್ಯನಾರಾಯಣರಾವ್ ಬಿ.ಎಸ್.ಸಿ, ಎಂ ಎ ಪದವಿಗಳನ್ನು ಪಡೆದವರು. ಕನ್ನಡ ಪರ ಕಾಳಜಿಯ ಮನಸ್ಸು, ಹಲವಾರು ಕನ್ನಡ ಚಳುವಳಿಗಳಲ್ಲಿ ಭಾಗಿಯಾಗಿದ್ದರು. ಸಮಾನ ಮನಸ್ಕರೊಡನೆ ಇವರು ಹುಟ್ಟು ಹಾಕಿದ ವನಸುಮ ಪ್ರಕಾಶನ ಸಂಸ್ಥೆ ಮತ್ತು ಹೊಂಬೆಳಗು, ಧ್ರುವ ಪತ್ರಿಕೆಗಳು. ಪ್ರಮುಖ ಕವಿಗಳಾದ ಪ್ರೊ. ನಿಸಾರ್ ಅಹಮದ್, ಪ್ರೊ. ಸುಮತೀಂದ್ರನಾಡಿಗ್, ಶ್ರೀಎಂ.ಎನ್. ವ್ಯಾಸರಾವ್ ಮುಂತಾದವರೆಲ್ಲರೂ ತಮ್ಮ ಮೊಟ್ಟಮೊದಲ ಕವನ ವಾಚಿಸಿದ್ದು ಇವರ ವಿಚಾರ ವಾಹಿನಿ ವೇದಿಕೆಯಲ್ಲೇ. ಶ್ರೀಯುತರ ಅನುವಾದಿತ ಕಾದಂಬರಿಗಳು, ಮಕ್ಕಳ ಪುಸ್ತಕಗಳು ರಚಿಸಿದ್ದು ಪ್ರೊ.ಎಲ್.ಎಸ್. ಶೇಷಗಿರಿರಾಯರೊಡನೆ ಸಂಪಾದಿಸಿದ 'ಕನ್ನಡ ತಾಯಿಗೆ ನುಡಿನಮನ' ಕೃತಿಯು ಹಂಪಿ ವಿಶ್ವವಿದ್ಯಾನಿಲಯದಿಂದ ಪ್ರಕಟಗೊಂಡಿವೆ. ಬಿ.ಎಂ.ಶ್ರೀ ಪ್ರತಿಷ್ಠಾನಕ್ಕಾಗಿ ಕವಿಗಳು ಕಂಡ ಬಿ.ಎಂ.ಶ್ರೀ ಎಂಬ ಕವನಗಳನ್ನು ಸಂಪಾದಿಸಿ ಕೊಟ್ಟಿದ್ದಾರೆ. ಇವರು ಆರು ಕೃತಿಗಳನ್ನು ಸಂಪಾದಿಸಿದ್ದಾರೆ.

ದಿವಂಗತರಿಗೆ ಬಿಎಂಶ್ರೀ ಪ್ರತಿಷ್ಠಾನವು ಶ್ರದ್ಧಾಂಜಲಿಯನ್ನು ಅರ್ಪಿಸುತ್ತದೆ.

ಕಿರುಪರಿಚಯ

## ಪಂಡಿತ್ ಓ. ಆರ್. ರಾಮಣ್ಣ

ಫೆಬ್ರವರಿ ೧೯೨೫ -೩೦-೯-೨೦೦೪

ಓ.ಆರ್. ರಾಮಣ್ಣನವರು ತುಮಕೂರು ತಾಲೂಕು ಊರುಕೆರೆ ಗ್ರಾಮದಲ್ಲಿ ಜನಿಸಿ ಎಸ್.ಎಸ್. ಎಲ್.ಸಿ. ಮುಗಿಸಿ ತಮ್ಮ ೨೦ನೇ ವಯಸ್ಸಿನಲ್ಲಿ ಪ್ರಾಥಮಿಕ ಶಾಲಾ ಅಧ್ಯಾಪಕರಾಗಿ ಸರ್ಕಾರಿ ಕೆಲಸಕ್ಕೆಸೇರಿದರು. ಕನ್ನಡ ಸಾಹಿತ್ಯದಲ್ಲಿ ಅಪಾರ ಆಸಕ್ತಿ ಇದ್ದ ಕಾರಣ ವಿದ್ಯಾ ಇಲಾಖೆಯಿಂದ ಮೈಸೂರಿನ ಸರ್ಕಾರಿ ಟ್ರೈನಿಂಗ್ ಕಾಲೇಜಿಗೆ ಪಂಡಿತ ಪದವಿ ಅಧ್ಯಯನದ ಸಲುವಾಗಿ ಆಯ್ಕೆಯಾಗಿ ೧೯೫೫-೫೯ರ ಅವಧಿಯಲ್ಲಿ ನಿಯೋಜನೆ ಹೊಂದಿ ಅಲ್ಲಿ ಅಭ್ಯಾಸಮಾಡಿ ಪಂಡಿತ್ ಪರೀಕ್ಷೆ ತೇರ್ಗಡೆ ಹೊಂದಿದರು. ಮುಂದೆ ೧೯೬೫ರಲ್ಲಿ ಪ್ರೌಢಶಾಲೆಯ ಅಧ್ಯಾಪಕರಾಗಿ ಬಡ್ತಿ ಹೊಂದಿ ೧೯೮೦ರ ವರೆಗೆ ತುಮಕೂರಿನ ಸರ್ಕಾರಿ ಪ್ರೌಢಶಾಲೆಯೂ ಸೇರಿದಂತೆ ವಿವಿಧ ಪ್ರೌಢಶಾಲೆಗಳಲ್ಲಿ ಅಧ್ಯಾಪಕರಾಗಿ ನಿವೃತ್ತರಾದರು. ಅವರಿಗೆ ಕುಮಾರವ್ಯಾಸ ಭಾರತ, ಹರಿಶ್ಚಂದ್ರ ಕಾವ್ಯ, ಜೈಮಿನಿಭಾರತ ಮೊದಲಾದ ಷಟ್ಪದೀ ಕಾವ್ಯಗಳು ವಾಚೋವಿಧೇಯವಾಗಿದ್ದುವು. ಈ ಕಾವ್ಯಗಳ ಗಮಕ ವ್ಯಾಖ್ಯಾನಕಾರರಾಗಿಯೂ ಬಹುವರ್ಷ ಕೆಲಸ ಮಾಡಿ ಅನೇಕ ಗಮಕ ತರಗತಿಗಳನ್ನು ತುಮಕೂರಿನಲ್ಲಿ ನಡೆಸಿ ಕೊಟ್ಟರು.

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2021-2023**
**dt. 28-12-2020**
**Office of Posting: Bangalore PSO, Bangalore 560026**
**Price : Annual Subscription Rs. 20/-**
**Date of publishing and Posting : 28-2-2021**

## FORM IV

(See Rule-8)

Statement about ownership and other particulars about Newspaper "HONGANASU Kannada Monthly" Bangalore. As required under Rules 8 of the Registration A Newspapers (Central) Rules 1956.

| | | | |
|---|---|---|---|
| 1. | Place of Publication | — | Bangalore |
| 2. | Periodicity of publication | — | Monthly |
| 3. | Printer's Name | — | Sri. B.R. Ravindranath |
| | Whether Citizen of India | — | Yes |
| | Address | — | BMSree Smaraka Pratishtana, 3rd Main, NR Colony, Bangalore-560019 |
| 4. | Publisher's Name | | Sri. B.R. Ravindranath on behalf of the BMSree Smaraka Pratishtana, (Regd.) |
| | Whether Citizen of India | — | Yes |
| | Address | — | BMSree Smaraka Pratishtana, 3rd Main, NR Colony, Bangalore-560019 |
| 5. | Editor's Name | — | Sri. B.R. Ravindranath |
| | Whether Citizen of India | — | Yes |
| | Address | — | BMSree Smaraka Pratishtana, 3rd Main, NR Colony, Bangalore-560019 |

I, B.R. Ravindranath here by declare that the particulars given are true to the best of my knowledge and belief.

Bangalore
1st March, 2021

Sd/-
B.R. Ravindranath

**Printed and published by** : B.R.Ravindranath on behalf of the BMSRI SMARAKA PRATISHTANA, B.M.Sri Pratishtana Road, (3rd Main Road) NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10 . and published at BMSRI SMARAKA PRATISHTANA, B.M.Sri Pratishtana Road, 3rd Main Road, NR Colony, Bangalore - 560019 Editor : **B.R.Ravindranath**

**ಅಚ್ಚಾದ ಪುಸ್ತಕ**

ಶ್ರೀಮತಿ/ಶ್ರೀ..................................................................................

..................................................................................

..................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಪ್ರತಿಷ್ಠಾನದ ರಸ್ತೆ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು - ೧೯
ದೂರವಾಣಿ : ೨೬೬೧೩೮೭೭